ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಪಿ.ಡಿ.ಓ.ಗಳ ಸೇವೆ ಕುರಿತು

ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

505(380) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 115 ಗ್ರಾಪಂಅ 2008 ದಿನಾಂಕ:07.07.2009ನ್ನು ಕೆ.ಎ.ಟಿ ರದ್ದುಗೊಳಿಸಿದೆಯೇ; ರದ್ದುಗೊಳಿಸಿದ್ದಲ್ಲಿ, ಪುನ: ಸದರಿ ಆದೇಶವನ್ನು ಬಳಸಲು ಅವಕಾಶ ನೀಡುವ ಸರ್ಕಾರಿ ಆದೇಶ/ಕಾಯ್ದೆಯ ಪ್ರತಿ ನೀಡುವುದು ;

(ಆ) ಜಿಲ್ಲಾ ಪಂಚಾಯತ್ ವಿಜಯಪುರ ಇವರ ಪತ್ರ ಸಂ:ಜಿಪಂಆ/ಗ್ರಾಪಂ/ಸಿಬ್ಬಂದಿ-ಸಿ.ಆರ್-37/2017-18 ದಿನಾಂಕ : 31.10.2019ರ ಕುರಿತು ಯಾವ ಆದೇಶ ಹೊರಡಿಸಲಾಗಿದೆ; ಆದೇಶ ಹೊರಡಿಸಲು ವಿಳಂಬವಾಗಿರುವುದಕ್ಕೆ ಕಾರಣವೇನು; (ವಿಳಂಬಕ್ಕೆ ಕಾರಣವಾಗಿರುವ ಅಧಿಕಾರಿಯ ಹೆಸರು ಮತ್ತು ಪದನಾಮ ತಿಳಿಸುವುದು)

(ಇ) Mysuru General Service (Development Branch and Local Government Branch) Recruitment Rules1962 ನಿರಸನಗೊಳಿಸಲಾಗಿದೆಯೇ; ನಿರಸನಗೊಂಡಲ್ಲಿ, ನಿರಸನಗೊಂಡ ನಿಯಮಗಳನ್ನು ಪುನ: ಬಳಸಲು ಅವಕಾಶ ನೀಡುವ ಸರ್ಕಾರದ ಆದೇಶ/ಕಾಯ್ದೆಯ ಪ್ರತಿ ನೀಡುವುದು ;

(ಈ) ಇಲಾಖಾ ಪರೀಕ್ಷೆ ತೆಗೆದುಕೊಳ್ಳಲು ಇರುವ ನಿಯಮಗಳೇನು; (ನಿಯಮಗಳ ಪ್ರತಿ ನೀಡುವುದು)

(ಉ) ಗ್ರಾಮ ಪಂಚಾಯತ್ ನೌಕರರಾದ ಬಿಲ್ ಕಲೆಕ್ಟರ್ ಕಂ ಕ್ಲರ್ಕ್‌ಗಳು ಇಲಾಖಾ ಪರೀಕ್ಷೆ ಬರೆಯಲು ಅರ್ಹರೆ ; ಅರ್ಹರಿದ್ದಲ್ಲಿ, ಆ ನಿಯಮಗಳ ಪ್ರತಿ ನೀಡುವುದು ;

(ಊ) ಪಿ.ಡಿ.ಓ. ಹುದ್ದೆಯಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿರುವವರ ಪಟ್ಟಿ ನೀಡುವುದು ; (ಸೇವೆಗೆ ಸೇರಿದ ದಿನಾಂಕ ಸಹಿತ ವಿವರ ನೀಡುವುದು)

(ಋ) ಎರಡು ಹೆಚ್ಚುವರಿ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಸೃಜಿಸುವ ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಈ ಕುರಿತು ಆರ್ಥಿಕ ಇಲಾಖೆಯ ಅಭಿಪ್ರಾಯವೇನು ? (ವಿವರಗಳನ್ನು ನೀಡುವುದು)